ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 15 ನೇ ಡಿಸೆಂಬರ್, 2020

ಅಕ್ರಮ ಮೊಬೈಲ್ ಟವರ್ ಅಳವಡಿಕೆ ಬಗ್ಗೆ

ಶ್ರೀ ಕೆ. ಗೋವಿಂದ ರಾಜ್(ವಿಧಾನಸಭೆಯಿಂದ ಚುನಾಯಿತರಾದವರು ) -

664 (801) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ರಾಜ್ಯದಲ್ಲಿ ಅಳವಡಿಸಲಾಗಿರುವ ಮೊಬೈಲ್ ಟವರ್‌ಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು, ಸಂಸ್ಥೆಯ ವಿವರ ಒದಗಿಸುವುದು)

(ಆ) ರಾಜ್ಯದಲ್ಲಿ ಮೊಬೈಲ್ ಟವರ್ ಅಳವಡಿಕೆಗೆ ಅನುಸರಿಸಲಾಗುತ್ತಿರುವ ಮಾನದಂಡ ಏನು; (ಮಾರ್ಗಸೂಚಿಗಳ ಪ್ರತಿ ಒದಗಿಸುವುದು)

(ಇ) ಅನುಮತಿ ರಹಿತ ಅನಧಿಕೃತ ಮೊಬೈಲ್ ಟವರ್‌ಗಳ ಅಳವಡಿಕೆಯಿಂದ ರಾಜ್ಯದ ಬೊಕ್ಕಸಕ್ಕೆ ಆಗುತ್ತಿರುವ ಆರ್ಥಿಕ ಹಾನಿ ಅಸಮರ್ಪಕ ಅಳವಡಿಕೆಯಿಂದ ಉಂಟಾಗಬಹುದಾದ ಜೀವಹಾನಿ ಕುರಿತು ಸರ್ಕಾರ ಗಂಭೀರವಾಗಿ ಆಲೋಚಿಸಿದೆಯೇ; (ಪ್ರತ್ಯೇಕ ವಿವರ ಒದಗಿಸುವುದು)

(ಈ) ಅನಧಿಕೃತ ಮೊಬೈಲ್ ಟವರ್ ಅಳವಡಿಕೆ ನಿಯಂತ್ರಿಸುವ ನಿಟ್ಟಿನಲ್ಲಿ ಹಾಗೂ ನಾಗರೀಕರ ಸುರಕ್ಷತೆ ಕುರಿತಾಗಿ ಸರ್ಕಾರ ಗಂಭೀರವಾಗಿ ಆಲೋಚಿಸಿದೆಯೇ; ಹಾಗಿದ್ದಲ್ಲಿ, ಈ ನಿಟ್ಟಿನಲ್ಲಿ ಕೈಗೊಂಡ ಕ್ರಮಗಳೇನು? (ಕುರಿತು ಮಾಹಿತಿ ಒದಗಿಸುವುದು)